ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 1, March-April 2024, Pp. 97-101
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಅಭಿವೃದ್ಧಿಯಲ್ಲಿ ಸುಸ್ಥಿರತೆಯ ಪರಿಕಲ್ಪನೆ

**ಸ್ಫೂರ್ತಿ ಕೆ.ಟಿ**
ಉಪನ್ಯಾಸಕರು, ವಿಶ್ವವಿದ್ಯಾನಿಲಯ ಸಂಧ್ಯಾ ಕಾಲೇಜು, ಮಂಗಳೂರು.

***Abstract:***
*ಸುಸ್ಥಿರ ಅಭಿವೃದ್ಧಿಯು ಮುಂದಿನ ಜನಾಂಗಕ್ಕೆ ತೊಂದರೆಯಾಗದಂತೆ ಪ್ರಸ್ತುತ ಲಭ್ಯವಿರುವ ಸಂಪನ್ಮೂಲಗಳನ್ನು ಬಳಕೆ ಮಾಡುವುದಾಗಿದೆ. ಪರಿಸರ ಮಾಲಿನ್ಯ, ಜೀವಜಲದ ಬತ್ತುವಿಕೆ, ಹವಮಾನದ ವೈಪರಿತ್ಯ, ಸಂಪನ್ಮೂಲಗಳ ಬರಿದಾಗುವಿಕೆ, ಅತಿಯಾದ ಮಾನವನ ಚಟುವಟಿಕೆ ಮುಂತಾದವುಗಳು ನಮ್ಮ ಭೂಮಿಗೆ ಮಾರಕವಾಗಿದೆ. ಸುಸ್ಥಿರ ಅಭಿವೃದ್ಧಿಯ ಗುರಿಗಳನ್ನು ಸಾಧಿಸುವ ಮೂಲಕ ಸುಸ್ಥಿರತೆಯನ್ನು ಅಳವಡಿಸಿಕೊಂಡಾಗ ಸ್ವಾಸ್ಥ ಸಮಾಜದ ನಿರ್ಮಾಣ ಸಾಧ್ಯವಾಗುತ್ತದೆ.*

***Keywords:*** *ಸುಸ್ಥಿರ ಅಭಿವೃದ್ಧಿ, ಪರಿಸರ ವೈವಿಧ್ಯತೆ, ಸ್ವಾಸ್ಥ್ಯ ಸಮಾಜ, ಬ್ರಂಡ್ಲ್ಯಾಂಡ್ ಆಯೋಗ.*

**ಪೀಠಿಕೆ**

*Without Nature we have nothing, without nature we are nothing-* ***Antonio Guterres.*** ಮಾನವನಿಗೆ ತಿಳುವಳಿಕೆಯ ಜ್ಞಾನ ಆರಂಭವಾದಾಗಿನಿಂದ ಅಭಿವೃದ್ಧಿಯ ಪರಿಕಲ್ಪನೆ ಉಗಮವಾಯಿತು. ಅಭಿವೃದ್ಧಿಯು ಮಾನವ ಹಾಗೂ ರಾಷ್ಟ್ರಕ್ಕೆ ಪೂರಕವಾಗಿರುವಂತಹ ಅಂಶವಾಗಿದೆ. ಅಭಿವೃದ್ಧಿ ಪರಿಕಲ್ಪನೆಯು ಪ್ರಾಚೀನ ಕಾಲದಲ್ಲಿ ಸಸಿಯಾಗಿ, ಮಧ್ಯಕಾಲದಲ್ಲಿ ಗಿಡವಾಗಿ, ಆಧುನಿಕ ಕಾಲದಲ್ಲಿ ಹೆಮ್ಮರವಾಗಿ ಬೆಳೆದು ಎಲ್ಲಾ ಕ್ಷೇತ್ರಗಳಲ್ಲಿ (ಶಿಕ್ಷಣ, ಸಾಮಾಜಿಕ, ಸಾಂಸ್ಕೃತಿಕ, ಪರಿಸರ, ವೈಜ್ಞಾನಿಕ, ತಂತ್ರಜ್ಞಾನ) ತನ್ನ ಬೇರುಗಳನ್ನು ಚಾಚಿದೆ.

"ಅತಿಯಾದರೆ ಅಮೃತವು ವಿಷ" ಎಂಬ ನಾಣ್ಣುಡಿಯಂತೆ ಮುಂದಾಲೋಚನೆಯಿಲ್ಲದ ಅಭಿವೃದ್ಧಿಯ ಹಪಹಪಿತನದಿಂದಾಗಿ ಪರಿಸರ ಮಲಿನಗೊಂಡು ಜೀವ ಸಂಕುಲಕ್ಕೆ ಹಾನಿಯನ್ನುಂಟು ಮಾಡುತ್ತಿದೆ. ಇದನ್ನು ನಿಯಂತ್ರಿಸಲು ಪ್ರಪಂಚದ ಬಹುತೇಕ ರಾಷ್ಟ್ರಗಳು "ಸುಸ್ಥಿರ ಅಭಿವೃದ್ಧಿ"ಗೆ ಪ್ರಾಮುಖ್ಯತೆಯನ್ನು ನೀಡುತ್ತಿವೆ. 1983ರಲ್ಲಿ ವಿಶ್ವಸಂಸ್ಥೆಯ ಸಹಯೋಗದೊಂದಿಗೆ ಬ್ರಂಡ್ಲ್ಯಾಂಡ್ ಆಯೋಗವು "ಭವಿಷ್ಯತ್ತಿನ ಪೀಳಿಗೆಯ ಅಗತ್ಯತೆಗಳೊಂದಿಗೆ ಯಾವುದೇ ರಾಜಿ ಮಾಡಿಕೊಳ್ಳದೆ ಇಂದಿನ ಪೀಳಿಗೆಯ ಅವಶ್ಯಕತೆಯನ್ನು ಪೂರೈಸಿಕೊಳ್ಳುವುದೇ ಸುಸ್ಥಿರ ಅಭಿವೃದ್ಧಿ" ಎಂದು ವ್ಯಾಖ್ಯಾನಿಸಿದೆ.

ಇಂಗ್ಲೆಡ್‌ನಲ್ಲಿ ಜರುಗಿದ ಕೈಗಾರಿಕಾ ಕ್ರಾಂತಿಯಿಂದಾಗಿ "ಅಭಿವೃದ್ಧಿ"ಯ ಪರಿಕಲ್ಪನೆ ವೇಗ ಪಡೆದುಕೊಂಡಿತು. ತರುವಾಯ ಆದ ಮಹಾಯುದ್ಧ (1939– 1945) ಹಾಗೂ ಜಾಗತೀಕರಣಗೊಂಡ ನಂತರ ಅಭಿವೃದ್ಧಿಯ ಮಾನದಂಡಗಳು ಹಾಗೂ ಅದರ ನೀತಿನಿಯಮಗಳು ಬದಲಾದವು. ಬದಲಾದ ನಿಯಮಗಳೇ ಸುಸ್ಥಿರ ಅಭಿವೃದ್ಧಿಗೆ ಮಾರಕವಾಗಲು ಪ್ರಾರಂಭಿಸಿದವು ಅಂದರೆ ನೆಲ, ಜಲ, ಪರಿಸರ

***Please cite this article as:*** ಸ್ಫೂರ್ತಿ, ಕೆ.ಟಿ. (2024). ಅಭಿವೃದ್ಧಿಯಲ್ಲಿ ಸುಸ್ಥಿರತೆಯ ಪರಿಕಲ್ಪನೆ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(1), 97–101.

ಮಾಲಿನ್ಯದಂತಹ ಸಮಸ್ಯೆಗಳು ಹುಟ್ಟಿಕೊಂಡವು. ಇಂತಹ ಸಮಸ್ಯೆಗಳನ್ನು ನಿವಾರಿಸಲು ಇಂದು ಪ್ರಪಂಚದ ಬಹುತೇಕ ರಾಷ್ಟ್ರಗಳು "ಸುಸ್ಥಿರ ಅಭಿವೃದ್ಧಿ"ಗೆ ಪ್ರಾಮುಖ್ಯತೆಯನ್ನು ನೀಡಲು ಪ್ರಾರಂಭಿಸಿದವು.

ಸೆಪ್ಟೆಂಬರ್ 25, 2015 ರಂದು ನಡೆದ 'ವಿಶ್ವಸಂಸ್ಥೆ ಸುಸ್ಥಿರ ಅಭಿವೃದ್ಧಿ ಸಮ್ಮೇಳನ'ದಲ್ಲಿ 2015 ರಿಂದ 2030ರವರೆಗೆ ಅನ್ವಯವಾಗುವಂತೆ ಹಾಗೂ ಪ್ರಪಂಚದ ಸುಸ್ಥಿರ ಅಭಿವೃದ್ಧಿಗೆ ಪೂರಕವಾಗುವಂತೆ 17 ಸುಸ್ಥಿರ ಗುರಿಗಳನ್ನು 169 ಧ್ಯೇಯೋದ್ದೇಶಗಳನ್ನು 304 ಸೂಚಕಗಳನ್ನು ಅಂಗೀಕರಿಸಲಾಯಿತು. ವಿಶ್ವಸಂಸ್ಥೆಯ ಸದಸ್ಯ ರಾಷ್ಟ್ರವಾಗಿರುವ 191 ರಾಷ್ಟ್ರಗಳ 2030ರ ಒಳಗೆ ತಮ್ಮ ದೇಶದಲ್ಲಿ ಸುಸ್ಥಿರ ಅಭಿವೃದ್ಧಿಯ ಹದಿನೇಳು ಗುರಿಗಳನ್ನು ತಲುಪಬೇಕೆನ್ನುವ ಪ್ರತಿಜ್ಞೆ ಮಾಡಿವೆ. ಅವುಗಳೆಂದರೆ ಬಡತನ ನಿರ್ಮೂಲನೆ, ಶೂನ್ಯ ಹಸಿವು, ಉತ್ತಮ ಆರೋಗ್ಯ ಮತ್ತು ಯೋಗಕ್ಷೇಮ, ಗುಣಮಟ್ಟದ ಶಿಕ್ಷಣ, ಲಿಂಗ ಸಮಾನತೆ, ಶುದ್ಧ ನೀರು ಮತ್ತು ನೈರ್ಮಲ್ಯ, ಕೈಗೆಟಕುವ ಮತ್ತು ಶುದ್ಧ ಶಕ್ತಿ ಸಂಪನ್ಮೂಲಗಳು, ಯೋಗ್ಯ ಕೆಲಸ ಮತ್ತು ಆರ್ಥಿಕ ಬೆಳವಣಿಗೆ, ಕೈಗಾರಿಕೆ, ನಾವಿನ್ಯತೆ ಮತ್ತು ಮೂಲಸೌಕರ್ಯ, ಅಸಮಾನತೆಯ ನಿವಾರಣೆ, ಸುಸ್ಥಿರ ನಗರಗಳು ಮತ್ತು ಸಮುದಾಯಗಳು, ಜವಾಬ್ದಾರಿಯುತ ಬಳಕೆ ಮತ್ತು ಉತ್ಪಾದನೆ, ಹವಾಮಾನಕ್ರಿಯೆ, ನೀರಿನ ಕೆಳಗಿನ ಜೀವನ, ನೆಲದ ಮೇಲಿನ ಜೀವನ, ಶಾಂತಿ ನ್ಯಾಯ ಮತ್ತು ಬಲವಾದ ಸಂಸ್ಥೆಗಳು, ಮತ್ತು ಪಾಲುದಾರಿಕೆಗಳು ಹಾಗೂ ಗುರಿಗಳು.

ಜಗತ್ತಿನಾದ್ಯಂತ ಅಭಿವೃದ್ಧಿಶೀಲ ಮತ್ತು ಅಭಿವೃದ್ಧಿ ಹೊಂದದ ಹಲವಾರು ರಾಷ್ಟ್ರಗಳು ಬಡತನದ ಬೇಗೆಯಲ್ಲಿ ಬೇಯುತ್ತಿವೆ, ಬಡತನದ ವಿಷ ವರ್ತುಲ ಜನರನ್ನು ಬೇರೆ ಬೇರೆ ಸಮಸ್ಯೆಗಳ ಸುಳಿಯಲ್ಲಿ ಸಿಲುಕಿಸುತ್ತದೆ. ಸುಸ್ಥಿರ ಅಭಿವೃದ್ಧಿಯು ಸಂಪೂರ್ಣವಾಗಿ ಬಡತನವನ್ನು ನಿರ್ಮೂಲನ ಮಾಡಬೇಕೆನ್ನುವ ಗುರಿಯನ್ನು ಹೊಂದಿದೆ. ಬಡತನದಿಂದಾಗಿ ಹಸಿವಿನ ಭೀಕರತೆ ಮನುಷ್ಯ ಮನುಷ್ಯನನ್ನೇ ತಿನ್ನುವಷ್ಟು ಇರುತ್ತದೆ. ಬಡತನವನ್ನು ಕಡಿಮೆ ಮಾಡಲು ಕ್ರಮ ಕೈಗೊಂಡಾಗ ಹಸಿವಿನ ಪ್ರಮಾಣ ಕಡಿಮೆಯಾಗುತ್ತದೆ. ಶೂನ್ಯ ಹಸಿವಿನ ಉದ್ದೇಶ ಹಸಿವು ಮುಕ್ತ ಜಗತ್ತನ್ನು ನಿರ್ಮಿಸುವುದರ ಜೊತೆಗೆ ಅಪೌಷ್ಟಿಕತೆಯಿಂದ ಉಂಟಾಗುವ ಆರೋಗ್ಯ ಸಮಸ್ಯೆಗಳಿಂದಾಗುವ ಸಾವನ್ನು ನಿಯಂತ್ರಿಸುವುದು ವಿಶ್ವಸಂಸ್ಥೆಯ ಗುರಿಯಾಗಿದೆ. ಉತ್ತಮ ಆರೋಗ್ಯದ ಜೊತೆಗೆ ಆರೋಗ್ಯ ಸೇವಾ ಸೌಲಭ್ಯವನ್ನು ವಿಸ್ತರಿಸುವುದು, ಆರೋಗ್ಯಕರ ಜೀವನಶೈಲಿಯನ್ನು ಅಳವಡಿಸಿಕೊಳ್ಳುವುದು ಸುಸ್ಥಿರತೆಯ ಮುಖ್ಯಗುರಿ ಯಾಗಿದೆ. ಶಿಕ್ಷಣ ಮಾನವನ ಸರ್ವತೋಮುಖ ಅಭಿವೃದ್ಧಿಯ ಪ್ರತೀಕ. ಪ್ರಾಥಮಿಕ ಮತ್ತು ಮಧ್ಯಮಿಕ ಶಿಕ್ಷಣವನ್ನು ಎಲ್ಲರಿಗೂ ಉಚಿತವಾಗಿ ನೀಡುವುದರ ಜೊತೆಗೆ ಉನ್ನತ ಮತ್ತು ತಾಂತ್ರಿಕ ಶಿಕ್ಷಣವನ್ನು ಕೈಗೆಟಕುವ ಬೆಲೆಯಲ್ಲಿ ನೀಡಿದಾಗ ಶಿಕ್ಷಣದ ಗುಣಮಟ್ಟ ಏರಿಕೆಯಾಗುವುದರ ಜೊತೆಗೆ ಶೈಕ್ಷಣಿಕ ಪ್ರಗತಿಯಾಗುತ್ತದೆ.

ಮಹಿಳೆಯರಿಗೂ ಶೈಕ್ಷಣಿಕ, ಆರ್ಥಿಕ, ಸಾಮಾಜಿಕ, ಔದ್ಯಮಿಕ, ಸಾಂಸ್ಕೃತಿಕ, ರಾಜಕೀಯ ಮುಂತಾದ ಕ್ಷೇತ್ರಗಳಲ್ಲಿ ಸಮಾನ ಅವಕಾಶವನ್ನು ನೀಡಿದಾಗ ಲಿಂಗ ಸಮಾನತೆಯನ್ನು ಸಾಧಿಸಬಹುದು. ಪ್ರಪಂಚದಾದ್ಯಂತ ಎಲ್ಲಾ ಜೀವಸಂಕುಲಕ್ಕೆ ಶುದ್ಧ ನೀರು ದೊರೆಯಬೇಕು ಆಗ ನೈರ್ಮಲೀಕರಣ ಸಾಧ್ಯವಾಗುತ್ತದೆ ಎಂಬ ಗುರಿ ಸುಸ್ಥಿರ ಅಭಿವೃದ್ಧಿಯದು. ಇದಲ್ಲದೆ ಪರಿಸರ ಸ್ನೇಹಿ ಇಂಧನಗಳಾದ ಸೌರಶಕ್ತಿ, ಜಲಶಕ್ತಿ ಪವನ ಶಕ್ತಿಗಳನ್ನು ಹೆಚ್ಚಾಗಿ ಉಪಯೋಗಿಸಬೇಕು. ಪೆಟ್ರೋಲ್, ಡೀಸೆಲ್‌ನಂತಹ ಇಂಧನಗಳ ಬಳಕೆ ಕಡಿಮೆಯಾಗ ಬೇಕೆಂಬುದು ಸುಸ್ಥಿರತೆಯ ಗುರಿಯಾಗಿದೆ. ಸಮಾಜಕ್ಕೆ ಮಾರಕವಾಗದ, ಪರಿಸರಕ್ಕೆ ದೌರ್ಜನ್ಯವೆಸಗದಂತಹ, ಜೀವಿಗಳಿಗೆ ತೊಂದರೆಯಾಗದಂತಹ ಯೋಗ್ಯ ಕೆಲಸವನ್ನು ಜನರು ಆಯ್ಕೆ ಮಾಡಿಕೊಳ್ಳುವುದರಿಂದ

ತಲಾ ಆದಾಯದ ಜೊತೆಗೆ ದೇಶದ ಆರ್ಥಿಕ ಬೆಳವಣಿಗೆಯಾಗುತ್ತದೆ. ಮೂಲ ಸೌಕರ್ಯಗಳ ಅಭಿವೃದ್ಧಿಯಾದಾಗ ಜನರ ಜೀವನಮಟ್ಟ ಅಭಿವೃದ್ಧಿಯಾಗುತ್ತದೆ. ಸುಸ್ಥಿರತೆಗೆ ಸಂಬಂಧಪಟ್ಟ ನಾವಿನ್ಯತೆಗಳಿಗೆ ಪ್ರೋತ್ಸಾಹ ಕೊಟ್ಟಾಗ ಸುಸ್ಥಿರ ಕೈಗಾರಿಕೆಗಳ ಬೆಳವಣಿಗೆಯಾಗುತ್ತದೆ.

ಪ್ರಪಂಚದಾದ್ಯಂತ ಜನರು ಹಲವಾರು ರೀತಿಯ ಅಸಮಾನತೆಯನ್ನು ಅನುಭವಿಸುತ್ತಿದ್ದಾರೆ. ಸಮಾನತೆಯನ್ನು ಪ್ರೋತ್ಸಾಹಿಸುವುದು ಸುಸ್ಥಿರ ಅಭಿವೃದ್ಧಿಯ ಗುರಿಯಾಗಿದೆ. ಕೈಗಾರಿಕರಣದಿಂದ ಆಗಿರುವ ನಗರೀಕರಣವು ಮಾಲಿನ್ಯಯುಕ್ತ ಸಮುದಾಯದ ನಿರ್ಮಾಣಕ್ಕೆ ಕಾರಣವಾಗಿದೆ. ಸುಸ್ಥಿರ ಅಭಿವೃದ್ಧಿಯು ಆರೋಗ್ಯಕ್ಕೆ ಪೂರಕವಾದ, ವಿಷ ಅನಿಲಗಳಿಂದ ಮುಕ್ತವಾದ ಸುಸ್ಥಿರ ನಗರಗಳ ಮತ್ತು ಸಮುದಾಯಗಳ ನಿರ್ಮಾಣ ಮಾಡುವ ಗುರಿ ಹೊಂದಿದೆ. ಸುಸ್ಥಿರ ಮಾರ್ಗದಲ್ಲಿ ವಸ್ತುಗಳನ್ನು ಉತ್ಪಾದನೆ ಮಾಡಿ ಬಳಸುವುದು ಸುಸ್ಥಿರ ಅಭಿವೃದ್ಧಿಯ ಗುರಿಯಾಗಿದೆ.

ಪರಿಸರದ ಮೇಲೆ ಮಾನವನ ಅತಿಯಾದ ಚಟುವಟಿಕೆಯೇ ಹವಮಾನ ಬದಲಾವಣೆಗೆ ಪ್ರಮುಖ ಕಾರಣ. ಅಭಿವೃದ್ಧಿಯ ಹೆಸರಿನಲ್ಲಿ ನಡೆಯುತ್ತಿರುವ ಮಾರಣಹೋಮ ಹಲವಾರು ಸಮಸ್ಯೆಗಳನ್ನು ಸೃಷ್ಟಿಸಿ ಕೊನೆಗೆ ಹವಮಾನದಲ್ಲಿ ವೈಪರಿತ್ಯವನ್ನುಂಟು ಮಾಡುತ್ತದೆ. ಸುಸ್ಥಿರ ಪರಿಕಲ್ಪನೆಯ ಅಭಿವೃದ್ಧಿಯನ್ನು ಮಾಡಿದಾಗ ಹವಮಾನ ವೈಪರಿತ್ಯವನ್ನು ಕಡಿಮೆಗೊಳಿಸಬಹುದು. ಸಾಗರ, ಸಮುದ್ರ, ಜಲ ಮೂಲಗಳು ಹಲವಾರು ಮಲೀನಕಾರಕಗಳಿಂದ ಮಲೀನಗೊಳ್ಳುತ್ತಿವೆ. ಜಲಮೂಲಗಳ ಮಲೀನವನ್ನು ಕಡಿಮೆಗೊಳಿಸುವ ಯೋಜನೆಯನ್ನು ಸುಸ್ಥಿರ ಅಭಿವೃದ್ಧಿ ಗುರಿಯಾಗಿಸಿಕೊಂಡಿದೆ. ಪ್ರಾಣಿ ಪಕ್ಷಿಗಳ ರಕ್ಷಣೆ, ಜೀವ ವೈವಿಧ್ಯೆತೆಯ ಅಳಿವನ್ನು ಪುನಃ ಸೃಷ್ಟಿಸುವುದು, ಅರಣ್ಯಗಳ ಮರುಸೃಷ್ಠಿ, ಭೂಮಿಯ ಮೇಲೆ ವಾಸಿಸುತ್ತಿರುವ ಎಲ್ಲಾ ಜೀವರಾಶಿಗಳು ಮುಕ್ತವಾಗಿ ಈ ಭೂಮಿಯ ಮೇಲೆ ಜೀವಿಸುವಂತೆ ಮಾಡುವುದು ಸುಸ್ಥಿರ ಅಭಿವೃದ್ಧಿಯ ಧ್ಯೇಯವಾಗಿದೆ. ಸುಸ್ಥಿರ ಸಮಾಜವನ್ನು ನಿರ್ಮಿಸಲು ಶಾಂತಿ ಮತ್ತು ನ್ಯಾಯಕ್ಕೆ ಪೂರಕವಾದ ಸಮಾಜವನ್ನು ನಿರ್ಮಿಸುವ ಸಂಸ್ಥೆಗಳನ್ನು ಬಲಪಡಿಸುವುದು. ಅಸಮಾನತೆಯಾನ್ನು ಕಡಿಮೆಗೊಳಿಸಿ ಎಲ್ಲರಿಗೂ ಒಂದೇ ತರನಾದ ನ್ಯಾಯವನ್ನು ದೊರಕಿಸಿಕೊಡುವುದು ಹಾಗೂ ಸುಸ್ಥಿರ ಅಭಿವೃದ್ಧಿಯ ವಿಧಾನಗಳನ್ನು ಬಲಪಡಿಸುವುದು ಮತ್ತು ಅನುಷ್ಠಾನಕ್ಕಾಗಿ ಜಾಗತೀಕ ಪಾಲುದಾರಿಕೆಯನ್ನು ಪುನರುಜ್ಜೀವನಗೊಳಿಸುವುದು ಸುಸ್ಥಿರ ಅಭಿವೃದ್ಧಿಯ ಗುರಿಯಾಗಿದೆ.

ದೇಶಗಳು ಅಭಿವೃದ್ಧಿ ಸಾಧಿಸಬೇಕಾದರೆ ಕೇವಲ ಆರ್ಥಿಕತೆಯಲ್ಲಿ ಮಾತ್ರ ಅಭಿವೃದ್ಧಿಯಾದರೆ ಸಾಲದು. ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಸಾಂಸ್ಕೃತಿಕವಾಗಿ ಮತ್ತು ರಾಜಕೀಯವಾಗಿ ಕೂಡ ಅಭಿವೃದ್ಧಿಯಾಗ ಬೇಕೆಂದು ಸುಸ್ಥಿರ ಅಭಿವೃದ್ಧಿ ಆಶಿಸುತ್ತದೆ.

**ಸುಸ್ಥಿರ ಅಭಿವೃದ್ಧಿಯ ಅವಶ್ಯಕತೆ**

ಜೀವ ವೈವಿದ್ಯತೆ ಮತ್ತು ಪರಿಸರವನ್ನು ಕಾಪಾಡಿಕೊಳ್ಳಲು ಸುಸ್ಥಿರ ಅಭಿವೃದ್ಧಿ ಅವಶ್ಯವಾಗಿದೆ. ಏಕೆಂದರೆ ಕಳೆದ 50 ವರ್ಷದಲ್ಲಿ ಮಾನವನ ಇತಿಹಾಸದಲ್ಲಿಯೇ ಅತಿ ಹೆಚ್ಚು ಪರಿಸರ ನಾಶ ಮಾಡಲಾಗಿದೆ. ಇದರಿಂದ ವಿವಿಧ ಬಗೆಯ ನೈಸರ್ಗಿಕ ಸಂಪನ್ಮೂಲಗಳು ನಾಶವಾಗುತ್ತಿದೆ. ಸಂಪನ್ಮೂಲಗಳ ಉಳಿವಿಗೆ ಸುಸ್ಥಿರ ಅಭಿವೃದ್ಧಿ ಅಗತ್ಯತೆ ಇದೆ. ವಿಶ್ವಸಂಸ್ಥೆಯ ವರದಿಯ ಪ್ರಕಾರ 2 ಮಿಲಿಯನ್ ಜೀವ ಪ್ರಬೇಧಗಳು ಅಪಾಯಕ್ಕೆ ಒಳಗಾಗಿವೆ. ಅಳಿವಿನಂಚಿನಲ್ಲಿರುವ ಪ್ರಬೇಧಗಳನ್ನು ಸಂರಕ್ಷಿಸಿ ಜೀವ ವೈವಿಧ್ಯತೆಯಲ್ಲಿ ಸಮತೋಲನ ತರಬೇಕಾದರೆ ಸುಸ್ಥಿರ ಅಭಿವೃದ್ಧಿ ಅಗತ್ಯವಾಗಿದೆ. ಮಾನವ 75% ಭೂಮಿಯನ್ನು ಅಕ್ರಮಿಸಿಕೊಂಡು ಇತರ ಜೀವ ಸಂಕುಲಗಳಾದ ಸಾಗರ ಜೀವಿಗಳು, ಹಿಮನದಿಗಳು, ಪ್ರಾಣಿಸಂಕುಲ, ಪಕ್ಷಿ ಸಂಕುಲ ಮೊದಲಾದವುಗಳನ್ನು ನಾಶಗೊಳಿಸುತ್ತಿದ್ದಾನೆ. ಸುಸ್ಥಿರ

ಅಭಿವೃದ್ಧಿಯು ದಕ್ಷವಾಗಿ ಅನುಷ್ಠಾನಗೊಂಡಾಗ ಸಕಲ ಜೀವರಾಶಿಗಳು ನೆಲೆ ಕಂಡುಕೊಳ್ಳಲು ಸಾಧ್ಯವಾಗುತ್ತದೆ. ಸುಸ್ಥಿರ ಅಭಿವೃದ್ಧಿಯು ಪರಿಸರ ಸ್ನೇಹಿ ನಾವೀನ್ಯತೆಗಳನ್ನು ಪ್ರೋತ್ಸಾಹಿಸುತ್ತದೆ. ಸುಸ್ಥಿರ ಅಭಿವೃದ್ಧಿಯು ಸುಸ್ಥಿರ ಆರ್ಥಿಕ ವ್ಯವಹಾರಗಳನ್ನು ಪ್ರೋತ್ಸಾಹಿಸುತ್ತದೆ. ಇದು ಗ್ರಾಹಕ ಸ್ನೇಹಿ ಮಾತ್ರವಲ್ಲದೆ ಪರಿಸರ ಸ್ನೇಹಿಯು ಆಗಿರುತ್ತದೆ.

**ಸುಸ್ಥಿರ ಅಭಿವೃದ್ಧಿಯ ಕಾರ್ಯತಂತ್ರಗಳು**

ಪರಿಸರ ಸ್ನೇಹಿ ಇಂದನಗಳಾದ CNG, LPG ಮುಂತಾದವುಗಳು ಹೆಚ್ಚಾಗಿ ಬಳಕೆಯಾಗಬೇಕು. ಪೆಟ್ರೋಲ್, ಡೀಸೆಲ್‌ನಂತಹ ಇಂದನಗಳ ಬಳಕೆ ಕಡಿಮೆಯಾಗಬೇಕು. 2030ರ ವೇಳೆಗೆ ಶೇ.30 ರಷ್ಟು ಕಾರ್ಬನ್ ಹೊರಸೂಸುವಿಕೆಯನ್ನು ಕಡಿಮೆಗೊಳಿಸು ವುದು. ಮುಗಿದು ಹೋಗದ ಶಕ್ತಿ ಸಂಪನ್ಮೂಲಗಳಾದ ಸೌರಶಕ್ತಿ, ಜಲಶಕ್ತಿ, ಪವನಶಕ್ತಿಯನ್ನು ಹೆಚ್ಚಾಗಿ ಬಳಕೆ ಮಾಡುವ ತಂತ್ರಜ್ಞಾನವನ್ನು ಅಭಿವೃದ್ಧಿಪಡಿಸಬೇಕು. ಮಾಲಿನ್ಯರಹಿತ ಇಂಧನಗಳಾದ ಇವು ಆರ್ಥಿಕ ಅಭಿವೃದ್ಧಿಯ ಜೊತೆಗೆ ಸುಸ್ಥಿರ ಆರ್ಥಿಕ ಅಭಿವೃದ್ಧಿಗೂ ಪ್ರೋತ್ಸಾಹಿಸುತ್ತದೆ. ಮನೆಯ, ಕೈಗಾರಿಕೆಗಳ, ವಾಣಿಜ್ಯ ಸಂಸ್ಥೆಗಳ ತ್ಯಾಜ್ಯವನ್ನು ಜೈವಿಕ ವಿಘಟನೆಯಾಗುವ ಮತ್ತು ಜೈವಿಕವಾಗಿ ವಿಘಟನೆಯಾಗದ ತ್ಯಾಜ್ಯ ಎಂದು ಎರಡು ಭಾಗಗಳಾಗಿ ಮಾಡಿ ಜೈವಿಕವಾಗಿ ವಿಘಟನೆಯಾಗದ ತ್ಯಾಜ್ಯವಾದ ಪ್ಲಾಸ್ಟಿಕ್ ಮುಂತಾದವುಗಳನ್ನು ಮರು ಬಳಕೆಯ ಮೂಲಕ ಇನ್ನೊಂದು ಉಪಯೋಗಕ್ಕೆ ಬಳಕೆ ಮಾಡಬೇಕು. ಅರಣ್ಯನಾಶ, ಪರಿಸರ ನಾಶವನ್ನು ನಿಯಂತ್ರಿಸುವುದು, ಬಡತನ ಹಾಗೂ ಹಸಿವು ಮುಕ್ತ ಸಮಾಜವನ್ನು ನಿರ್ಮಿಸುವುದು ಹಾಗೂ ಸುಸ್ಥಿರ ಕೃಷಿಗೆ ಪ್ರೋತ್ಸಾಹಿಸುವುದು ಹಾಗೂ ನೈಸರ್ಗಿಕ ಸಂಪನ್ಮೂಲಗಳನ್ನು ದಕ್ಷ ರೀತಿಯಲ್ಲಿ ಬಳಕೆ ಮಾಡುವ ತಂತ್ರಜ್ಞಾನವನ್ನು ಅಭಿವೃದ್ಧಿಪಡಿಸುವ ಜೊತೆಗೆ ಸ್ವಚ್ಛ ಪರಿಸರ, ಶುದ್ಧವಾದ ನೀರು ಹಾಗೂ ಶುದ್ಧವಾದ ಶಕ್ತಿ ಸಂಪನ್ಮೂಲಗಳನ್ನು ಬಳಸುವುದು ಅಗತ್ಯವಾಗಿದೆ.

**ಸುಸ್ಥಿರ ಅಭಿವೃದ್ಧಿಗೆ ಇರುವ ಸವಾಲುಗಳು**

ಪೃಥ್ವಿಯಲ್ಲಿ ಬಹುತೇಕ ಸಂಪನ್ಮೂಲಗಳು ಮಿತವಾಗಿದೆ. ಅವುಗಳ ಯೋಜಿತ ಬಳಕೆಯಿಂದ ಮಾತ್ರ ಮುಂದಿನ ಪೀಳಿಗೆಗೆ ಲಭ್ಯವಾಗುತ್ತವೆ. ಕ್ಷಿಪ್ರ ಬಳಕೆಯಿಂದಾಗಿ ಮುಂದಿನ ಪೀಳಿಗೆಗೆ ಲಭ್ಯವಾಗುವುದಿಲ್ಲ. ವೇಗವಾಗಿ ಬೆಳೆಯುತ್ತಿರುವ ಜನಸಂಖ್ಯೆಯು ಭೂಮಿಯ ಮೇಲಿರುವ ಹಲವಾರು ಸಂಪನ್ಮೂಲಗಳ ನಾಶಕ್ಕೆ ಕಾರಣವಾಗಿದೆ. ಆದ್ದರಿಂದ ಜನಸಂಖ್ಯೆಯು ಸುಸ್ಥಿರ ಅಭಿವೃದ್ಧಿಗೆ ಸವಾಲಾಗಿದೆ. ಪರಿಸರ ವ್ಯವಸ್ಥೆ ಎಂದಾಗ ಕೇವಲ ಮಾನವನಷ್ಟೆಯಲ್ಲದೆ ಇತರ ಜೀವ ಸಂಕುಲಗಳಾದ ಪ್ರಾಣಿ, ಪಕ್ಷಿ, ಕ್ರಿಮಿಕೀಟಗಳು, ಮತ್ಸ್ಯ ಸಂಕುಲ, ಗಿಡಮರ ಎಲ್ಲವೂ ಒಳಗೊಳ್ಳುತ್ತದೆ. ಅರಣ್ಯನಾಶದಿಂದಾಗಿ ಇವುಗಳೆಲ್ಲಾ ನಶಿಸಿ ಹೋಗುತ್ತಿವೆ. ಸುಸ್ಥಿರ ಅಭಿವೃದ್ಧಿಗೆ ಅರಣ್ಯ ನಾಶವು ಒಂದು ಸವಾಲಾಗಿದೆ. ಬಡತನ ಮತ್ತು ಅಪೌಷ್ಠಿಕತೆ, ಮಿತಿ ಮೀರಿದ ಜನಸಂಖ್ಯೆಯು ಸಂಪನ್ಮೂಲಗಳ ಹಂಚಿಕೆಯನ್ನು ಮಿತಗೊಳಿಸುತ್ತದೆ. ಇದರಿಂದ ಬಡತನ ಅಪೌಷ್ಠಿಕತೆಯಂತಹ ತೊಂದರೆಗಳು ಬರುತ್ತದೆ. ಇದಲ್ಲದೆ ಜಲಮೂಲಗಳು ಹಲವಾರು ರೀತಿಯ ಮಲೀನಗಳಿಗೆ ತುತ್ತಾಗಿ ಪ್ರಪಂಚ ಇಂದು ಶುದ್ಧ ನೀರಿನ ಕೊರತೆಯನ್ನು ಅನುಭವಿಸುತ್ತಿದೆ. ಇದರೊಂದಿಗೆ ಸಂಪನ್ಮೂಲಗಳ ಕೊರತೆಯೂ ಕೂಡ ಸುಸ್ಥಿರ ಅಭಿವೃದ್ಧಿಗೆ ಸವಾಲಾಗಿದೆ.

**ಸಮಾರೋಪ**

ಸುಸ್ಥಿರ ಅಭಿವೃದ್ಧಿಯ ಸಾಧನೆಗೆ ಹಲವಾರು ಸವಾಲುಗಳಿದ್ದರೂ ಅದೆಲ್ಲವನ್ನು ಮೀರಿ ಸುಸ್ಥಿರ ಗುರಿಗಳ ಸಾಧನೆಗೆ ಎಲ್ಲರೂ ಕ್ರಮವಹಿಸಬೇಕು. ಯಾಕೆಂದರೆ ಜೀವ ಸಂಕುಲದ ಉಳಿವು ಸುಸ್ಥಿರ ಜೀವನ ಶೈಲಿಯ ಮೇಲೆ ನಿಂತಿದೆ. 2030ರ ಒಳಗೆ ನಾವು ಸುಸ್ಥಿರ ಅಭಿವೃದ್ಧಿಯ ಗುರಿಯನ್ನು ಮುಟ್ಟಲೇಬೇಕಾದ ಅನಿವಾರ್ಯತೆ ಇದೆ.

ಪರಾಮರ್ಶನ ಗ್ರಂಥಗಳು


- Fujita, K., & Mizushima, T. (2020). *Sustainable development in India: Groundwater Irrigation, Energy Use, and Food Production*. Routledge.
- Griggs, D., Smith, M. S., Gaffney, O., Rockström, J., Öhman, M., Shyamsundar, P., Steffen, W., Glaser, G., Kanie, N., & Noble, I. (2013). Sustainable development goals for people and planet. *Nature*, *495*(7441), 305–307. https://doi.org/10.1038/495305a
- Sachs, J. D. (2012). From millennium development goals to sustainable development goals. *Lancet*, *379*(9832), 2206–2211. https://doi.org/10.1016/s0140-6736(12)60685-0
- Singh, Y. (2017, August 22). Sustainable Development and India. *Jagranjosh.com*. https://www.jagranjosh.com/current-affairs/sustainable-development-and-india-1503408725-1
- *Sustainable Development Goals* (n.d.). *NITI Aayog*. https://www.niti.gov.in/sustainable-development-goal